# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| **ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ** | : | **289** |
| **ಸದಸ್ಯರ ಹೆಸರು** | : | ಶ್ರೀ ಬಿ.ಎಂ.ಫಾರೂಕ್ (ವಿಧಾನ ಸಭೆಯಿಂದ ಚುನಾಯಿತರಾದವರು) |
| **ಉತ್ತರಿಸಬೇಕಾದ ದಿನಾಂಕ** | : | 13.09.2021 |
| **ಉತ್ತರಿಸುವ ಸಚಿವರು** | | ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು |

*****

| | ಪ್ರಶ್ನೆ | ಉತ್ತರ |
|---|---|---|
| ಅ) | ಇತ್ತೀಚೆಗೆ ಇಂಧನ ಇಲಾಖೆ Wheeling & Banking ಬಗ್ಗೆ ಹೊಸ ಸುತ್ತೋಲೆಯನ್ನು ಹೊರಡಿಸಿ Banking ವಿಷಯವನ್ನು ತೆಗೆದಿರುವುದು ನಿಜವೇ; | ಹೌದು. Wheeling and Banking ಬಗ್ಗೆ ಸರ್ಕಾರದ ದಿನಾಂಕ: 17-6-2020ರ ಪತ್ರದಲ್ಲಿ ಹೊಸ ನಿರ್ದೇಶನಗಳನ್ನು ಹೊರಡಿಸಿ Banking Facility ಯನ್ನು ತೆಗೆದುಹಾಕುವ ಬಗ್ಗೆ ಅಗತ್ಯ ಕ್ರಮ ವಹಿಸುವಂತೆ ಕೆಪಿಟಿಸಿಎಲ್ ಹಾಗೂ ಎಲ್ಲಾ ಎಸ್ಕಾಂ ರವರಿಗೆ ಸೂಚಿಸಲಾಗಿತ್ತು.<br><br>ಕೆ.ಇ.ಆರ್.ಸಿ ರವರು ದಿನಾಂಕ:18.12.2020 ರಂದು ನವೀಕರಿಸಬಹುದಾದ ಇಂಧನ ಯೋಜನೆಗಳಿಗೆ ಸಂಬಂಧಿಸಿದಂತೆ ವೀಲಿಂಗ್ ಮತ್ತು ಬ್ಯಾಂಕಿಂಗ್ ವ್ಯವಸ್ಥೆಯನ್ನು ಮುಂದುವರೆಸುವ ವಿಷಯದಲ್ಲಿ ಕೆಲವು ಸ್ಪಷ್ಟನೆಯನ್ನು ನೀಡಿರುವ ಹಿನ್ನೆಲೆಯಲ್ಲಿ, ಇತ್ತೀಚಿನ ದಿನಗಳಲ್ಲಿ ನೂತನ ಯೋಜನೆಗಳಿಗೆ ಪುನಃ ಬ್ಯಾಂಕಿಂಗ್ ಸೌಲಭ್ಯವನ್ನು ವೀಲಿಂಗ್ ಒಪ್ಪಂದಕ್ಕೆ ಸೇರಿಸಿ, ಮಾನ್ಯ ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಂತೆ ಸರ್ಕಾರದಿಂದ ಅನುಮೋದನೆ ನೀಡಲಾಗುತ್ತಿದ್ದು, ಅದರಂತೆ ವಿದ್ಯುತ್ ಸರಬರಾಜು ಕಂಪನಿಗಳು ಬ್ಯಾಂಕಿಂಗ್ ಸೌಲಭ್ಯವನ್ನು ನೀಡುತ್ತಿವೆ. |
| ಆ) | ಪಕ್ಕದ ರಾಜ್ಯಗಳಲ್ಲಿ Wheeling & Banking facilities ಇದ್ದು, ನಮ್ಮ ರಾಜ್ಯದಲ್ಲಿ ಮಾತ್ರ ಇದನ್ನು ತೆಗೆಯಲು ಕಾರಣವೇನು; ನಮ್ಮ ರಾಜ್ಯದ ಈ ಸುತ್ತೋಲೆ Renewable Energy Company ಗಳಿಗೆ ತುಂಬಾ ತೊಂದರೆಯಾಗುತ್ತಿರುವುದಲ್ಲದೇ ಬಂಡವಾಳ ಹೂಡುವವರ ಸಂಖ್ಯೆಯು ಇಳಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯದಲ್ಲಿ ನವೀಕರಿಸಬಹುದಾದ ಇಂಧನ ಯೋಜನೆಗಳ ಸಾಮರ್ಥ್ಯವು 15193 ಮೆಗಾವ್ಯಾಟ್ ಮೀರಿ ಅನುಷ್ಠಾನಗೊಂಡಿರುವುದರಿಂದ, ಬ್ಯಾಂಕಿಂಗ್ ಸೌಲಭ್ಯವನ್ನು ಹೊಸ RE ಯೋಜನೆಗಳಿಗೆ ಹಾಗೂ Wheeling & Banking/PPA ನವೀಕರಣಕ್ಕೆ ಬರುವ ಒಡಂಬಡಿಕೆಗಳಿಗೆ ತೆಗೆದುಹಾಕಲಾಗಿತ್ತು.<br><br>ನವೀಕರಿಸಬಹುದಾದ ಇಂಧನ ಯೋಜನೆಗಳ ಉತ್ಪಾದಕರು ಬ್ಯಾಂಕಿಂಗ್ ಸೌಲಭ್ಯದಲ್ಲಿ ಕಡಿಮೆ ವಿದ್ಯುತ್ ಬೇಡಿಕೆ ಅವಧಿಯಲ್ಲಿ ಉತ್ಪಾದನೆಯಾದ ವಿದ್ಯುತ್ ಅನ್ನು ಗರಿಷ್ಠ ವಿದ್ಯುತ್ ಬೇಡಿಕೆ ಅವಧಿಯಲ್ಲೂ ಕೂಡ ಬಳಕೆ ಮಾಡಲು ಅವಕಾಶವಿದ್ದುದರಿಂದ ಮತ್ತು ಈ ರೀತಿಯ ಸೌಲಭ್ಯದಿಂದ ವಿದ್ಯುತ್ ಸರಬರಾಜು ಕಂಪನಿಗಳ ಆರ್ಥಿಕ ವ್ಯವಸ್ಥೆಯ ಮೇಲೆ ಪರಿಣಾಮ ಬೀರುತ್ತಿದ್ದರಿಂದ, ಈ ಬ್ಯಾಂಕಿಂಗ್ ಸೌಲಭ್ಯವನ್ನು ತೆಗೆಯಲಾಗಿತ್ತು.<br><br>ಪ್ರಸ್ತುತ, Wheeling & Banking Facilities ಗೆ ಸಂಬಂಧಿಸಿದಂತೆ, ಕರ್ನಾಟಕ ಸರ್ಕಾರ ಹಾಗೂ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ಕಾಲಕಾಲಕ್ಕೆ ಹೊರಡಿಸುವ ಸುತ್ತೋಲೆ/ಆದೇಶಗಳನ್ನು ವಿದ್ಯುತ್ ಸರಬರಾಜು ಕಂಪನಿಗಳು ಪಾಲಿಸುತ್ತಿವೆ. |

...2

| | | |
|---|---|---|
| ಇ) | ಕೇಂದ್ರ ಸರ್ಕಾರ Renewable Energy ಗಳಿಗೆ ಒತ್ತು ನೀಡಿದ್ದು ರಾಜ್ಯ ಸರ್ಕಾರಗಳಿಗೆ ಇದನ್ನು ಹೆಚ್ಚಿನ ಮಟ್ಟದಲ್ಲಿ ಅಭಿವೃದ್ಧಿ ಮಾಡಲು ಸುತ್ತೋಲೆಯಲ್ಲಿ ತಿಳಿಸಿದ್ದರೂ ಸಹ ಕಳೆದ ಸುಮಾರು 5 ವರ್ಷಗಳಿಂದ ಸರ್ಕಾರವು ಯಾವುದೇ (PPA ಮಾಡದೇ) Renewable Energyಗೆ (Wind) ಉತ್ತೇಜನ ನೀಡದಿರಲು ಕಾರಣವೇನು | ಕರ್ನಾಟಕ ರಾಜ್ಯದಲ್ಲಿ ಈವರೆವಿಗೂ ನವೀಕರಿಸಬಹುದಾದ ಇಂಧನ ಮೂಲಗಳಿಂದ ಅಳವಡಿಸಲಾಗಿರುವ ಸಾಮರ್ಥ್ಯ 15193 ಮೆಗಾವ್ಯಾಟ್ ಗಳಾಗಿದ್ದು, ಮಾನ್ಯ ಕೆ.ಇ.ಆರ್.ಸಿ ನಿಗದಿಪಡಿಸಿದ ನವೀಕರಿಸಬಹುದಾದ ಇಂಧನ ಖರೀದಿ ಭಾದ್ಯತೆ (Renewable Purchase Obligation (RPO)) ಗುರಿಯನ್ನು ಈಗಾಗಲೇ ರಾಜ್ಯ ಸಾಧಿಸಿರುವುದರಿಂದ 2017 ರಿಂದ ಯಾವುದೇ ನವೀಕರಿಸಬಹುದಾದ ಇಂಧನ ಯೋಜನೆಗಳನ್ನು ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆ ಬಂದಲ್ಲಿ ಮಾತ್ರ ಬಿಡ್ಡಿಂಗ್ ಮುಖಾಂತರ ಹಂಚಿಕೆ ಮಾಡಲು ಸೂಚಿಸಿರುತ್ತದೆ. ಈ ಸಂಬಂಧ ಪವನ ವಿದ್ಯುತ್ ಸೇರಿದಂತೆ ಇತರೆ ನವೀಕರಿಸಬಹುದಾದ ಇಂಧನ ಅಭಿವೃದ್ಧಿದಾರರುಗಳಿಗೆ ಹೊಸ ಯೋಜನೆಗಳನ್ನು ಅನುಷ್ಠಾನಗೊಳಿಸಲು ಅನುಮೋದನೆ ನೀಡುತ್ತಿಲ್ಲ.<br><br>ಆದರೆ Open Access ವರ್ಗದಡಿಯಲ್ಲಿ Wheeling and Banking ಮುಖಾಂತರ ಮೂರನೇ ವ್ಯಕ್ತಿಗಳಿಗೆ ಮಾರಾಟ ಮತ್ತು ಸ್ವಬಳಕೆ ಯೋಜನೆಗಳಿಗೆ ಹಂಚಿಕೆ ನೀಡಲಾಗುತ್ತಿದೆ.<br><br>ರಾಜ್ಯದಲ್ಲಿ 31/07/2021ರ ಅಂತ್ಯಕ್ಕೆ ಅಳವಡಿಸಲಾಗಿರುವ ನವೀಕರಿಸಬಹುದಾದ ಇಂಧನ ಯೋಜನೆಗಳ ಸಾಮರ್ಥ್ಯದ ವಿವರ: |

| ನ.ಇ. ಮೂಲಗಳು | ಹಂಚಿಕೆ ಸಾಮರ್ಥ್ಯ ಮೆ.ವ್ಯಾಗಳಲ್ಲಿ | ಅಳವಡಿಸಲಾಗಿರುವ ಸಾಮರ್ಥ್ಯ ಮೆ.ವ್ಯಾಗಳಲ್ಲಿ |
|---|---|---|
| ಸೌರ | 9119.58 | 7144.66 |
| ಪವನ | 20163.76 | 4967.34 |
| ಕಿರುಜಲ | 3010.00 | 903.46 |
| ಜೈವಿಕ | 395.13 | 139.03 |
| ಸಹವಿದ್ಯುತ್ | 2212.65 | 1731.16 |
| ಘನತ್ಯಾಜ್ಯ | 51.00 | 0.00 |
| ಒಟ್ಟು | **35851.91** | **15193.43** |

| | | |
|---|---|---|
| ಈ) | ಕಡಿಮೆ ಬೆಲೆಯ ಹಾಗೂ ಪರಿಸರ ಹಾನಿ ಮಾಡದ ಈ ವಿದ್ಯುತ್ ಖರೀದಿಸಲು ಸರ್ಕಾರ ಕ್ರಮ ತೆಗೆದುಕೊಳ್ಳದಿರಲು ಕಾರಣಗಳೇನು; | ಕರ್ನಾಟಕ ರಾಜ್ಯವು ನವೀಕರಿಸಬಹುದಾದ ಇಂಧನ ಮೂಲಗಳಿಂದ 15193 ಮೆ.ವ್ಯಾ ಸಾಮರ್ಥ್ಯವನ್ನು ಅನುಷ್ಠಾನಗೊಳಿಸಿದ್ದು, ದೇಶದಲ್ಲಿ ನಂ.1 ಸ್ಥಾನದಲ್ಲಿದೆ. ರಾಜ್ಯದಲ್ಲಿ ಈಗಿರುವ ವಿದ್ಯುತ್ ಬೇಡಿಕೆಯಲ್ಲಿ ಸುಮಾರು ಶೇ.50ರಷ್ಟು ವಿದ್ಯುತ್ ನವೀಕರಿಸಬಹುದಾದ ಇಂಧನ ಮೂಲಗಳಿಂದ ಬಳಸಲಾಗುತ್ತಿದೆ. ಮಾನ್ಯ ಕೆ.ಇ.ಆರ್.ಸಿ ನಿಗದಿಪಡಿಸಿರುವ RPO ಗುರಿಯನ್ನು ಈಗಾಗಲೇ ರಾಜ್ಯ ಸಾಧಿಸಿರುವುದರಿಂದ ಇನ್ನು ಮುಂದೆ ಯಾವುದೇ ನವೀಕರಿಸಬಹುದಾದ ಇಂಧನ ಯೋಜನೆಗಳನ್ನು ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆ ಬಂದಲ್ಲಿ ಮಾತ್ರ ಬಿಡ್ಡಿಂಗ್ |

...3

| | | |
|---|---|---|
| | | ಮುಖಾಂತರ ಹಂಚಿಕೆ ಮಾಡಲು ಸೂಚಿಸಿರುತ್ತದೆ. ಆದರೆ, ಅಭಿವೃದ್ಧಿದಾರರುಗಳಿಗೆ Open Access ಮುಖಾಂತರ Wheeling and Banking ಮೂಲಕ ಮಾತ್ರ ಮೂರನೇ ವ್ಯಕ್ತಿಗಳಿಗೆ ಮಾರಾಟ ಮತ್ತು ಸ್ವಬಳಕೆ ಯೋಜನೆಗಳಿಗೆ ಅನುಮೋದನೆ ನೀಡಲು ಅವಕಾಶ ಕಲ್ಪಿಸಲಾಗಿದೆ. |
| ಉ) | ಕರ್ನಾಟಕ ರಾಜ್ಯಗಳಲ್ಲಿ ನವೀಕರಿಸಬಹುದಾದ ಇಂಧನ ಮೂಲಗಳಿಂದ HYBRID Project (Solar+Wind) ವಿದ್ಯುತ್ ಖರೀದಿಸುವ ಪ್ರಸ್ತಾವನೆ ಸರ್ಕಾರದ ಮುಂದೆ ಇದೆಯೇ ಇಲ್ಲದಿದ್ದಲ್ಲಿ ಈ ನವೀಕರಿಸಿದ ಇಂಧನ ಉತ್ಪಾದಿಸಲು ಉತ್ತೇಜನ ನೀಡಲು ಸರ್ಕಾರ ಕ್ರಮ ವಹಿಸುವುದೇ? | ಕರ್ನಾಟಕ ರಾಜ್ಯದ ವಿದ್ಯುತ್ ಸರಬರಾಜು ಕಂಪನಿಗಳು ನವೀಕರಿಸಬಹುದಾದ ಇಂಧನ ಖರೀದಿ ಭಾದ್ಯತೆ (RPO) ಗುರಿಯನ್ನು ಈಗಾಗಲೇ ಸಾಧಿಸಿರುವುದರಿಂದ Hybrid Projects (Solar+Wind) ವಿದ್ಯುತ್‌ನ್ನು ಖರೀದಿಸುವ ಪ್ರಸ್ತಾವನೆ ಇರುವುದಿಲ್ಲ.<br><br>ಆದರೆ, ಅಭಿವೃದ್ಧಿದಾರರು ಸದರಿ Hybrid (Solar+Wind) ಯೋಜನೆಗಳನ್ನು Open Access ವರ್ಗದಡಿ ಅಭಿವೃದ್ಧಿಪಡಿಸಿ ಮೂರನೇ ವ್ಯಕ್ತಿಗೆ ಮಾರಾಟ ಅಥವಾ ಸ್ವಂತ ಬಳಕೆಗಾಗಿ ಅರ್ಜಿಗಳನ್ನು ಸಲ್ಲಿಸಿದಲ್ಲಿ ಪರಿಶೀಲಿಸಿ ಹಂಚಿಕೆ ನೀಡಲಾಗುವುದು. |

ಸಂಖ್ಯೆ: ಎನರ್ಜಿ 200 ಇಬಿಎಸ್ 2021

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ
ಸಚಿವರು